ಎನ್. ನೋಸೋವ್



# ಜೀವಂತ ಹ್ಯಾಟು

ಎನ್. ನೋಸೋವ್



# ಜೀವಂತ ಹ್ಯಾಟು

ಚಿತ್ರಗಳು:
ಐ. ಸೆಮ್ಯೋನೊವ್
ಅನುವಾದ:
ಕೆ.ಎಲ್. ಗೋಪಾಲಕೃಷ್ಣರಾವ್



ರಾದುಗ ಪ್ರಕಾಶನ
ಮಾಸ್ಕೋ

ಮೂರ್ಜಿಕ್ ಅಂತ ಒಂದು ಬೆಕ್ಕಿನಮರಿ ಇತ್ತು. ಅದು ಒಂದು ದಿನ ನೆಲದ ಮೇಲೆ ಬೀರುವೊಂದರ ಬಳಿ ಕುಳಿತು ನೊಣಗಳನ್ನು ಹಿಡಿಯಲು ಯತ್ನಿಸುತ್ತಿತ್ತು. ಬೀರುವಿನ ಅಂಚಿನಲ್ಲಿ ಒಂದು ಹ್ಯಾಟಿತ್ತು. ಒಂದು ನೊಣ ಅದರ ಮೇಲೆ ಹೋಗಿ ಕುಳಿತುದನ್ನು ಮೂರ್ಜಿಕ್ ಕಂಡಿತು, ತಕ್ಷಣವೇ ನೆಗೆದು ತನ್ನ ಪಂಜದಿಂದ ಹ್ಯಾಟನ್ನು ಹಿಡಿಯಿತು. ಹ್ಯಾಟು ಬೀರುವಿನ ಮೇಲಿನಿಂದ ಕೆಳಕ್ಕೆ ಜಾರಿ ಬಿದ್ದಿತು. ಮೂರ್ಜಿಕ್ ಕೂಡ ಆಯ ತಪ್ಪಿ ಕೆಳಕ್ಕೆ ಉರುಳಿತು. ಹ್ಯಾಟು ಕೆಳಕ್ಕೆ ಬೀಳುತ್ತ ಮೂರ್ಜಿಕ್ ಮೇಲೆ ಸರಿಯಾಗಿ ಮಗುಚಿಕೊಂಡಿತು. ಮೂರ್ಜಿಕ್ ಈಗ ಎಲ್ಲಿ?



ವೊಲೋದ್ಯ ಹಾಗೂ ವಾದಿಕ್ ಆ ಕೋಣೆಯಲ್ಲಿ ಕುಳಿತುಕೊಂಡಿದ್ದರು. ಅವರು ಬಣ್ಣ ಹಾಕುವ ಪುಸ್ತಕ ಮುಂದಿಟ್ಟುಕೊಂಡು ಆ ಕಾರ್ಯದಲ್ಲೇ ತನ್ಮಯರಾಗಿದ್ದರು. ಪ್ಯಾಟು ಮೂರ್ಜಿಕ್ ಮೇಲೆ ಬಿದ್ದುದನ್ನು ಅವರು ಕಾಣಲಿಲ್ಲ. ಆದರೆ ವಿಚಿತ್ರ ಶಬ್ದವೊಂದಂತೂ ಅವರಿಗೆ ಕೇಳಿಸಿತು.



"ಏನೋ ಅದು, ಏನಾಯಿತೋ?" ವಾದಿಕ್ ಕೇಳಿದ.
"ನೋಡು, ಇದಕ್ಕೆ ಜೀ-ಜೀ-ಜೀವ ಬಂದು ಬಿಟ್ಟಿದೆ!"
"ಯಾವುದಕ್ಕೋ?"



"ಈ ಹ್ಯಾ-ಹ್ಯಾ-ಟಿಗೆ!"
"ಎಲ್ಲಾದರೂ ಉಂಟೇನೋ! ಹುಚ್ಚು ಮಾತು!"
"[illegible] ನೋ-ನೋಡು!"
ವಾದಿಕ್ ತಾನೇ ನೋಡಲು ಎದ್ದು ನಿಂತ.



ಆಗ ಇದ್ದಕ್ಕಿದ್ದಂತೆ ಹ್ಯಾಟು ಅವನ ಕಡೆಗೇ ಸರಿದುಕೊಂಡು ಬರ ತೊಡಗಿತು. ಅವನೂ "ಸಹಾಯ !" ಎಂದು ಕಿರುಚಿಕೊಂಡು ಸೋಫಾದ ಮೇಲಕ್ಕೆ ಎಗರಿದ. ವೊಲೋದ್ಯನೂ ಅವನ ಹಿಂದೆಯೇ ಸೋಫಾದ ಮೇಲಕ್ಕೆ ಎಗರಿದ.



ಈ ಮಧ್ಯೆ ಹ್ಯಾಟು ತೆವಳಿಕೊಂಡು ಹೋಗಿ ಕೋಣೆಯ ಮಧ್ಯದಲ್ಲಿ ನಿಂತಿತು. ಅದನ್ನು ನೋಡುತ್ತಿದ್ದಂತೆ ಹುಡುಗರ ಎದೆ ಡವಡವಗುಟ್ಟಿತು. ಆಮೇಲೆ ಹ್ಯಾಟು ಮತ್ತೆ ಸೋಫಾದ ಕಡೆಗೆ ತೆವಳಿಕೊಂಡು ಬರತೊಡಗಿತು.

"ಅಯ್ಯಯ್ಯೋ ! ಸಹಾಯ ! ಸಹಾಯ !" ಎಂದು ಹುಡುಗರು ಕೂಗಿಕೊಂಡರು.



ಇಬ್ಬರೂ ಸೋಫಾದಿಂದ ಧುಮುಕಿ ಕೋಣೆಯಿಂದ ಹೊರಕ್ಕೆ ಓಡಿದರು. ಅಡಿಗೆಮನೆಗೆ ಓಡಿ ಹೋಗಿ ಬಾಗಿಲನ್ನು ಭದ್ರವಾಗಿ ಮುಚ್ಚಿಕೊಂಡರು.

"ಏನಾಗಿದೆ ಈ ಹ್ಯಾಟಿಗೆ? ಯಾಕದು ಹೀಗೆ ಆ ಕಡೆ ಈ ಕಡೆ ಅಡ್ಡಾಡುತ್ತಿದೆ?" ವಾದಿಕ್ ಆಶ್ಚರ್ಯಪಟ್ಟ.

"ಯಾರಾದರೂ ಅದಕ್ಕೆ ದಾರ ಕಟ್ಟಿ ಎಳೀತಿದಾರೋ ಹೇಗೆ? !"

“ಹೋಗು. ನೋಡಿಕೊಂಡು ಬಾ.”

“ಇಲ್ಲಪ್ಪ. ಬಾ, ಇಬ್ಬರೂ ಒಟ್ಟಿಗೇ ಹೋಗೋಣ. ನಾನು ಈ ಬೆಂಕಿ ಕೆದಕುವ ಸಲಾಕಿ ಹಿಡಿದುಕೊಂಡು ಬರ್ತೀನಿ. ಅದೇನಾದರೂ ನಮ್ಮ ಕಡೇಗೇ ಬರೋಕೆ ಬಂದರೆ ಇದರಿಂದ ಜೋರಾಗಿ ಹೊಡೀತೀನಿ.”

“ತಾಳು. ನಾನೂ ಒಂದು ಸಲಾಕಿ ತಗೋತೀನಿ.”

“ಇಲ್ಲವೋ. ನಮ್ಮ ಮನೇಲಿ ಇರೋದು ಇದೊಂದೇ.”

“ಹಾಗಾದರೆ ನಾನು ಈ ಸ್ಕೀ ಕೋಲನ್ನೇ ತಗೋತೀನಿ.”



ಹೀಗೆ ಇಬ್ಬರೂ ಸಲಾಕಿ ಸ್ಕೀ ಕೋಲುಗಳಿಂದ ಸಜ್ಜಿತರಾಗಿ, ಮೆಲ್ಲಗೆ ಬಾಗಿಲು ತೆರೆದು ಇಣಿಕಿ ನೋಡಿದರು.

"ಎಲ್ಲಿ ಅದು?" ವೊಲೋದ್ಯ ಕೇಳಿದ.

"ಅಲ್ನೋಡು ಅಲ್ಲಿ, ಮೇಜಿನ ಬಳಿ."

ಹ್ಯಾಟು ಮೇಜಿನ ಬಳಿ ಕದಲದೆ ಕುಳಿತಿತ್ತು.





"ನೋಡಿದೆಯಾ? ಅದಕ್ಕೀಗ ನಮ್ಮನ್ನು ಕಂಡರೆ ಹೆದರಿಕೆ!" ಎಂದು ಹುಡುಗರು ಸಂತೋಷಪಟ್ಟರು.

"ನೋಡು. ನಾನು ಹ್ಯಾಗೆ ಅದನ್ನು ಹೆದರಿಸುತ್ತೀನಿ ಈಗ" ಎಂದ ವೊಲೋದ್ಯ.

ಅವನು ಸಲಾಕಿಯನ್ನು ಮೇಜಿನ ಕಾಲಿಗೆ ಬಡಿಯುತ್ತ ಶಬ್ದ ಮಾಡತೊಡಗಿದ.

"ಹೇಯ್, ಹೇಯ್, ಹ್ಯಾಟೇ!"

ಆದರೆ ಹ್ಯಾಟು ಮಿಸುಕಾಡಲಿಲ್ಲ.

"ತಾಳು. ಆಲೂಗಡ್ಡೆ ತಂದು ಅದರಿಂದ ಅದಕ್ಕೆ ಹೊಡೆಯೋಣ" ವಾದಿಕ್ ಹೇಳಿದ.

ಇಬ್ಬರೂ ಆಲೂಗಡ್ಡೆ ತರಲು ಅಡಿಗೆಮನೆಗೆ ಮತ್ತೆ ಹೋದರು. ಕೈ ತುಂಬ ಆಲೂಗಡ್ಡೆ ತುಂಬಿಕೊಂಡು ಬಂದು ಅದನ್ನು ಹ್ಯಾಟಿನತ್ತ ಎಸೆಯ ತೊಡಗಿದರು. ಕೊನೆಗೆ ವಾದಿಕ್ ಎಸೆದ ಒಂದು ಆಲೂಗಡ್ಡೆ ಸರಿಯಾಗಿ ಹ್ಯಾಟಿಗೆ ತಗುಲಿತು. ಹ್ಯಾಟು ಮೇಲಕ್ಕೆ ಹಾರಿತು. "ಮಿಯಾವ್" ಅನ್ನುವ ಶಬ್ದ ಕೇಳಿಬಂತು.

ಬೆಕ್ಕಿನಮರಿಯ ಬೂದು ಬಾಲದ ಒಂದು ಚೂರು ಹ್ಯಾಟಿನ ಅಂಚಿನ ಕೆಳಗಿನಿಂದ ಹೊರ ಚಾಚಿಕೊಂಡಿತ್ತು.

"ಅಯ್ಯೋ, ಇದು ಮೂರ್ಜಿಕ್!" ಎಂದು ಬಾಲಕರು ಒಟ್ಟಿಗೇ ಕೂಗಿಕೊಂಡರು.

ವಾದಿಕ್ ಬೆಕ್ಕಿನಮರಿಯನ್ನು ಬಾಚಿ ಎತ್ತಿ ಅಪ್ಪಿಕೊಂಡ.

"ಅಯ್ಯೋ, ತುಂಟ ಮೂರ್ಜಿಕ್! ನೀನು ಹ್ಯಾಗೆ ಆ ಹ್ಯಾಟಿನ ಕೆಳಗೆ ಸೇರಿಕೊಂಡೆ?"

ಆದರೆ ಮೂರ್ಜಿಕ್ ಏನೂ ಹೇಳಲಿಲ್ಲ. ಸುಮ್ಮನೆ ಪರ್‌ಗುಟ್ಟುತ್ತಾ ಇತ್ತು. ಉಜ್ವಲ ಬೆಳಕಿಗೆ ಕಣ್ಣುಗಳನ್ನು ಕಿರಿದು ಮಾಡುತ್ತ ಇತ್ತು.



